## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಛೇರಿ, ಚಿತ್ರದುರ್ಗ

### ಪ್ರಕಟಣೆ

**ಸಂಖ್ಯೆ: ಜಿ.ಸ.ಕ.ಅ:ಎಸ್–3/ಸಿಆರ್–17/2008–09, ದಿನಾಂಕ:9ನೇ ಜುಲೈ, 2008**

**ವಿಷಯ:** 2008–09ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಪರಿಶಿಷ್ಟ ಜಾತಿಯ ಕಾನೂನು ಪದವೀದರರನ್ನು ಆಯ್ಕೆ ಮಾಡುವ ಕುರಿತು.

2008–09ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆಯಿಂದ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಪರಿಶಿಷ್ಟ ಜಾತಿಯ ಕಾನೂನು ಪದವೀಧರರನ್ನು ಆಯ್ಕೆ ಮಾಡಲು ಕಾನೂನು ಪದವೀಧರರಿಂದ ಅರ್ಜಿಯನ್ನು ಕರೆಯಲಾಗಿದೆ. ನಿಗದಿತ ಅರ್ಜಿ ನಮೂನೆಗಳನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ದಿನಾಂಕ:09.07.2008 ರಿಂದ 01.08.2008 ರವರೆಗೆ ಪಡೆಯಬಹುದು. ಭರ್ತಿ ಮಾಡಲಾದ ಅರ್ಜಿಗಳನ್ನು ದಿನಾಂಕ:02.08.2008ರ ಒಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಗೆ ಸಲ್ಲಿಸಬೇಕು. ನಂತರ ಬರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ನಿಯಮಗಳು**

1) ಈ ಪ್ರಕಟಣೆಯಲ್ಲಿ ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕಕ್ಕೆ ಕಾನೂನು ಪಧವೀಯನ್ನು ಪಡೆದು 2 ವರ್ಷ ಮೀರಿರಬಾರದು.

2) ತರಬೇತಿಯನ್ನು ಚಿತ್ರದುರ್ಗ ಜಿಲ್ಲೆಯಲ್ಲಿಯೇ ಪಡೆಯಬೇಕು.

3) ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು 35ಕ್ಕೆ ಮೀರಿರಬಾರದು.

4) ಆಯ್ಕೆ ಮಾಡಲಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಸರ್ಕಾರಿ ಆದೇಶದ ರೀತ್ಯಾ ರೂ.1,000/– ಶಿಷ್ಯ ವೇತನವನ್ನು ನೀಡಲಾಗುವುದು.

5) ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಗಳ ಕಾಲ ಕಡಿಮೆ ಇಲ್ಲದ ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸಿರುವ ನ್ಯಾಯವಾದಿಗಳ ಬಳಿ ತರಬೇತಿ ಪಡೆದಿರಬೇಕು. ಹಾಗೂ ಯಾರ ಬಳಿ ತರಬೇತಿ ಪಡೆಯುತ್ತಿದ್ದೀರಿ ಎಂಬ ಬಗ್ಗೆ ಲಿಖಿತ ರೂಪದಲ್ಲಿ ತಿಳಿಸಿರಬೇಕು.

6) ತರಬೇತಿಯ ಅವಧಿಯು 4 ವರ್ಷವಿದ್ದು ಆಯ್ಕೆಯಾದ ಅಭ್ಯರ್ಥಿಗಳು ಮದ್ಯದಲ್ಲಿ ಬಿಡುವುದಿಲ್ಲ ಎಂದು, ಒಂದು ವೇಳೆ ಬಿಟ್ಟರೆ ತರಬೇತಿ ಅವಧಿಯಲ್ಲಿ ಪಡೆದಿರುವ ಶಿಷ್ಯವೇತನವನ್ನು ಶೇ.10 ರೂ.ಗಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಹಿಂದುರಿಗಿಸಿ ಕಟ್ಟುವುದಾಗಿ ಮುಚ್ಚಳಿಕೆ ಬರೆದು ಕೊಡಬೇಕು. ಈ ನಿಯಮ ರಾಜ್ಯ ಅಥವಾ ಕೇಂದ್ರ ಸರ್ಕಾರದಲ್ಲಿ ನೌಕರಿ ಪಡೆದರೆ ಅನ್ವಹಿಸುವುದಿಲ್ಲ.

7) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ಹಾಗೂ ಸುಳ್ಳು ದಾಖಲೆಗಳನ್ನು ನೀಡಿ ಆಯ್ಕೆಯಾಗಿ ಶಿಷ್ಯವೇತನ ಪಡೆದರೆ ಅಂತಹ ಅಭ್ಯರ್ಥಿಗಳು ತರಬೇತಿ ಅವಧಿಯಲ್ಲಿ ಪಡೆದಶಿಷ್ಯ ವೇತನವನ್ನು ಒಟ್ಟಿಗೆ ಶೇ.10 ರೂ.ಗಳ ಬಡ್ಡಿಯಲ್ಲಿ ಸರ್ಕಾರಕ್ಕೆ ಹಿಂದುರಿಗಿ ಕಟ್ಟಬೇಕು. ತಪ್ಪಿದರೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲಿ ಮಾಡಲಾಗುತ್ತದೆ.

8) ಆಯ್ಕೆಯಾದ ಅಭ್ಯರ್ಥಿಯು ನಿಗದಿತ ದಿನಾಂಕದೊಳಗೆ ಹಾಜರಾಗದಿದ್ದರೆ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು.

9) ಸಂದರ್ಶನ ನಡೆಸುವ ಸ್ಥಳ ಮತ್ತು ದಿನಾಂಕವನ್ನು ಅಂಚೆ ಮೂಲಕ ತಿಳಿಸಲಾಗುವುದು.

10) ಅರ್ಜಿ ಸಲ್ಲಿಸಲು ಕೊನೆ ದಿನಾಂಕ:01.08.2008.

11) ಆಯ್ಕೆಯನ್ನು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಪರಿಗಣಿಸಲಾಗುತ್ತದೆ.

12) 2006–07, 2008–09ನೇ ಸಾಲಿಗೆ ಪರಿಶಿಷ್ಟ ಜಾತಿಯ ಕಾನೂನು ಪದವೀಧರರ ಅಭ್ಯರ್ಥಿಯ ಗುರಿ–17.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ,
ಚಿತ್ರದುರ್ಗ.

ಪಿ.ಆರ್.839

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಯವರ ಕಛೇರಿ, ಚಾಮರಾಜನಗರ

### ಪತ್ರಿಕಾ ಪ್ರಕಟಣೆ

**ಸಂಖ್ಯೆ: ಜಿಸಕಅ/ ಡಿ2/ ಪಿಆರ್–13/2008–09, ದಿನಾಂಕ:5ನೇ ಜುಲೈ, 2008**

**ವಿಷಯ:** 2008–09ನೇ ಸಾಲಿಗೆ ಪರಿಶಿಷ್ಟ ಜಾತಿ ಕಾನೂನು ಪದವೀಧರರನ್ನು ಆಡಳಿತ ನ್ಯಾಯಾಧೀಕರಣ ತರಬೇತಿಗೆ ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂ:ಸಿಆರ್–8:ಇಎಸ್‌ಡಬ್ಲ್ಯೂ–89, ದಿನಾಂಕ:21.11.1990.

2008–09ನೇ ಸಾಲಿಗೆ ಪರಿಶಿಷ್ಟ ಜಾತಿ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿಗಾಗಿ ಆಯ್ಕೆ ಮಾಡಲು ಈ ಕೆಳಕಂಡ ನಿಬಂಧನೆಗಳಿಗೆ ಅನುಗುಣವಾಗಿ ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಂದ ಅರ್ಜಿಗಳನ್ನು

ಆಹ್ವಾನಿಸಲಾಗಿದೆ. ನಿಗದಿತ ಅರ್ಜಿ ನಮೂನೆಗಳನ್ನು ಕಛೇರಿ ವೇಳೆಯಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಕೊಠಡಿ ಸಂಖ್ಯೆ: 121, ಜಿಲ್ಲಾ ಆಡಳಿತ ಭವನ, ಚಾಮರಾಜನಗರ ಇಲ್ಲಿ ಪಡೆಯಬಹುದು. ಮೇಲ್ಕಂಡ ತರಬೇತಿಗೆ ಅರ್ಜಿ ಸಲ್ಲಿಸಬಯಸುವ ಅಭ್ಯರ್ಥಿಗಳು ಕೆಳಕಂಡ ನಿಬಂಧನೆಗಳಿಗನುಸಾರ ಅರ್ಜಿಗಳನ್ನು ದಿನಾಂಕ:07.08.2008 ರೊಳಗೆ ಈ ಕಛೇರಿಗೆ ಸಲ್ಲಿಸಲು ಕೋರಲಾಗಿದೆ.

**ನಿಬಂಧನೆಗಳು**

1) ಅಭ್ಯರ್ಥಿಯು ಪ.ಜಾತಿ ಕಾನೂನು ಪದವೀಧರನಾಗಿರಬೇಕು. ಹಾಗೂ ಅರ್ಜಿ ಸಲ್ಲಿಸುವ ಕಡೇ ದಿನಾಂಕಕ್ಕೆ ಕಾನೂನು ಪದವಿಯಲ್ಲಿ ತೇರ್ಗಡೆಯಾಗಿ ಎರಡು ವರ್ಷಕ್ಕೆ ಮೀರಿರಬಾರದು.

2) ಅರ್ಜಿ ಸಲ್ಲಿಸುವ ಕಾನೂನು ಪದವೀಧರರು 35 ವರ್ಷದೊಳಗಿರಬೇಕು.

3) ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಗೆ ವರದಿ ಮಾಡಿಕೊಂಡ ದಿನದಿಂದ 4 ವರ್ಷಗಳವರೆಗೆ ತರಬೇತಿಯನ್ನು ಪಡೆಯಬೇಕಾಗುತ್ತದೆ. ಹಾಗೂ ತರಬೇತಿಯ ಅವಧಿಯಲ್ಲಿ ರೂ.1000–00 ಮಾಹೆಯಾನ ಶಿಷ್ಯ ವೇತನವನ್ನು ಮಂಜೂರು ಮಾಡಲಾಗುವುದು. ಮಧ್ಯದಲ್ಲಿ ತರಬೇತಿ ಬಿಟ್ಟು ಹೋದಲ್ಲಿ ಮಂಜೂರು ಮಾಡಿರುವ ಶಿಷ್ಯ ವೇತನವನ್ನು ಅಂತಹವರಿಂದ ವಸೂಲು ಮಾಡಲಾಗುವುದು.

4) ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಚಾಮರಾಜನಗರ ಜಿಲ್ಲೆಯ ನಿವಾಸಿಗಳಿರತಕ್ಕದ್ದು.

5) ಜಿಲ್ಲಾ ಮಟ್ಟದ ಆಯ್ಕೆ ಸಮಿತಿ ಮುಖಾಂತರ ತರಬೇತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

6) ಅರ್ಜಿ ಸಲ್ಲಿಸಬಯಸುವ ಅಭ್ಯರ್ಥಿಗಳು ನಿಗದಿತ ಅರ್ಜಿಯೊಡನೆ ತಹಶೀಲ್ದಾರ್‌ರವರಿಂದ ಪಡೆದ ಜಾತಿ ದೃಢೀಕರಣ ಪತ್ರ ಕಾನೂನು ಪದವಿ ಅಂಕಪಟ್ಟಿಗಳು, ಪದವಿ ಪತ್ರ, ಬಾರ್ ಕೌನ್ಸಿಲ್ ನೊಂದಣಿ ಪತ್ರದ ದೃಢೀಕೃತ ಪ್ರತಿಗಳನ್ನು ಸಲ್ಲಿಸಬೇಕು.

ಮೇಲ್ಕಂಡ ನಿಬಂಧನೆಗೊಳಪಟ್ಟು ಅಸಕ್ತ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ದಿನಾಂಕ:07.08.2008 ರಂದು 4–00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸಲು ಕೋರಲಾಗಿದೆ.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ,
ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

ಪಿ.ಆರ್.840

## ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ರಾಮನಗರ ಜಿಲ್ಲೆ, ರಾಮನಗರ

## ಪ್ರಕಟಣೆ

**ಸಂಖ್ಯೆ: ಡಿಬಿಸಿಎಂ:ರಾಜಿ: ಕಾ.ತ:ಸಿಆರ್–2:2008–09, ದಿನಾಂಕ:10ನೇ ಜುಲೈ, 2008**

**ವಿಷಯ:** 2008–09ನೇ ಸಾಲಿನಲ್ಲಿ ರಾಮನಗರ ಜಿಲ್ಲೆಯ ಹಿಂದುಳಿದ ವರ್ಗಗಳ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 60 ಎಸ್.ಇ.ಡಬ್ಲ್ಯೂ 89, ದಿನಾಂಕ:02.11.1990.
2) ಸರ್ಕಾರಿ ಆದೇಶ ಸಂಖ್ಯೆ: ಸಕಇ 116 ಬಿಎಂಎಸ್ 99, ದಿನಾಂಕ:07.10.1999.
3) ಸರ್ಕಾರಿ ಆದೇಶ ಸಂಖ್ಯೆ: ಸಕಇ 446, ಬಿಎಂಎಸ್ 2005, ಬೆಂಗಳೂರು ದಿನಾಂಕ:01.12.2005.

2008–09ನೇ ಸಾಲಿನಲ್ಲಿ ರಾಮನಗರ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ (ವರ್ಗ–1, 2ಎ, 3ಎ ಮತ್ತು 3ಬಿ) ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ 4 ವರ್ಷಗಳ ಅವಧಿಗೆ ತರಬೇತಿಗೆ ಅರ್ಹ ಅಭ್ಯರ್ಥಿಗಳ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ನಿಗದಿತ ಅವಧಿಯೊಳಗೆ ಕಛೇರಿ ವೇಳೆಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ರಾಮನಗರ ಜಿಲ್ಲೆ, ಪಿ.ಎಲ್.ಡಿ. ಬ್ಯಾಂಕ್ ರಸ್ತೆ, ಐಜೂರು, ರಾಮನಗರ ಇಲ್ಲಿಗೆ ದಿನಾಂಕ:14.08.2008 ರೊಳಗೆ ಸಲ್ಲಿಸುವುದು.

**ನಿಬಂಧನೆಗಳು**

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿಯನ್ನು ಮುಗಿಸಿ 2 (ಎರಡು) ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ:30.03.2002ರ ಆದೇಶದ ಅನುಸಾರ ಹಿಂದುಳಿದ ವರ್ಗ–1, 2ಎ, 3ಎ ಮತ್ತು 3ಬಿ ವರ್ಗೀಕರಣಕ್ಕೆ ಒಳಪಟ್ಟಿರಬೇಕು. ಹಾಗೂ ಮೇಲ್ಕಂಡ ವರ್ಗಗಳಿಗೆ ನಿಗದಿಪಡಿಸಲಾದ ಜಾತಿ ಆದಾಯ ಪ್ರಮಾಣ ಪತ್ರಗಳೊಂದಿಗೆ ವಿವರಗಳನ್ನು ಭರ್ತಿ ಮಾಡಿ, ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

3) ಪ್ರವರ್ಗ–1ನ್ನು ಹೊರತುಪಡಿಸಿ ಇತರೆ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ರೂ.15,000/–ಗಳ ವಾರ್ಷಿಕ ಆದಾಯ ಮಿತಿಯನ್ನು ನಿಗದಿಪಡಿಸಿದೆ.

4) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು. (ಪ್ರತಿ ಲಗತ್ತಿಸಬೇಕು)

5) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳನ್ನು ಮೀರಿರಬಾರದು. ಅಂದರೆ ವರ್ಗ–1ರ ಅಭ್ಯರ್ಥಿಗಳಿಗೆ 1 ವರ್ಷ ರಿಯಾಯಿತಿ ಇದ್ದು, ಅವರ ವಯಸ್ಸು 31 ವರ್ಷಗಳು ಮೀರಿರಬಾರದು.

6) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಅವಧಿಯೊಳಗೆ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಹಾಗೂ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟುಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10ರ ಬಡ್ಡಿಯೊಂದಿಗೆ ಭೂ ಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಆದರೆ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರದಲ್ಲಿ ವಿವಿಧ ಹುದ್ದೆಗಳಿಗೆ ನೇಮಕಾತಿ ಹೊಂದಿದ ಅಭ್ಯರ್ಥಿಗಳಿಗೆ ಅನ್ವಯಿಸುವುದಿಲ್ಲ.

7) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ತಿಂಗಳಿಗೆ ರೂ.1000/–ಗಳ ತರಬೇತಿ ಭತ್ಯೆಯನ್ನು ದಿನಚರಿ ಆಧಾರದ ಮೇರೆಗೆ ನೀಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್/ ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ನಿಯೋಜಿಸಲಾಗುವುದು.

9) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಕಾಲಕಾಲಕ್ಕೆ ಹೊಂದಿರುವ ಸರ್ಕಾರದ ಆದೇಶಗಳಿಗೆ ಬದ್ಧನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

10) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ರಾಮನಗರ ಜಿಲ್ಲೆ, ಪಿ.ಎಲ್.ಡಿ. ಬ್ಯಾಂಕ್ ರಸ್ತೆ, ಐಜೂರು, ರಾಮನಗರ ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

11) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯ ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

12) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

13) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ:14.08.2008.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಕಲ್ಯಾಣ ಇಲಾಖೆ, ರಾಮನಗರ ಜಿಲ್ಲೆ, ರಾಮನಗರ.

## ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ರಾಮನಗರ ಜಿಲ್ಲೆ, ರಾಮನಗರ

## ಪ್ರಕಟಣೆ

**ಸಂಖ್ಯೆ: ಡಿಬಿಸಿಎಂ: ರಾಜಿ:ಕಾ.ತ:ಸಿಆರ್–3:2008–09, ದಿನಾಂಕ:10ನೇ ಜುಲೈ, 2008**

**ವಿಷಯ:** 2008–09ನೇ ಸಾಲಿನಲ್ಲಿ ರಾಮನಗರ ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68 ಎಸ್.ಇ.ಡಬ್ಲ್ಯೂ 89, ದಿನಾಂಕ:02.11.1990.
2) ಸರ್ಕಾರದ ಆದೇಶ ಸಂಖ್ಯೆ: ಸಕಇ 205 ಬಿಎಂಎಸ್ 99, ದಿನಾಂಕ:07.10.1999.
3) ಸರ್ಕಾರಿ ಆದೇಶ ಸಂಖ್ಯೆ: ಸಕಇ 446, ಬಿಎಂಎಸ್ 2005, ಬೆಂಗಳೂರು, ದಿನಾಂಕ:01.12.2005.

2008–09ನೇ ಸಾಲಿನಲ್ಲಿ ರಾಮನಗರ ಜಿಲ್ಲೆಗೆ ಸೇರಿರುವ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಖ್ಖರು ಹಾಗೂ ಪಾರ್ಸಿ ಸಮುದಾಯಕ್ಕೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ 4 ವರ್ಷಗಳ ಅವಧಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಹ ಮತೀಯ ಅಲ್ಪಸಂಖ್ಯಾತರಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಬಲ್ಲ ಕಾನೂನು ಪದವೀಧರ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು

ಈ ಕಛೇರಿಯಲ್ಲಿ ನಿಗದಿತ ಅವಧಿಯೊಳಗೆ ಕಛೇರಿ ವೇಳೆಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಆಯ್ಕೆ ಸಮಿತಿ ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ರಾಮನಗರ ಜಿಲ್ಲೆ, ಪಿ.ಎಲ್.ಡಿ. ಬ್ಯಾಂಕ್ ರಸ್ತೆ, ಐಜೂರು, ರಾಮನಗರ ಇವರ ಕಛೇರಿಯಲ್ಲಿ ದಿನಾಂಕ:14.08.2008ರೊಳಗೆ ಸಲ್ಲಿಸುವುದು.

**ನಿಬಂಧನೆಗಳು:**

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿಯನ್ನು ಮುಗಿಸಿ 2 (ಎರಡು) ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳು ಮತೀಯ ಅಲ್ಪಸಂಖ್ಯಾತರ ಸಮುದಾಯವಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಖ್ಖರು ಹಾಗೂ ಪಾರ್ಸಿ ಇವುಗಳಿಗೆ ಸೇರಿರಬೇಕು. ಹಾಗೂ ಸರ್ಕಾರದಿಂದ ನಿಗದಿಪಡಿಸಲಾದ ಜಾತಿ ಆದಾಯ ಘೋಷಣಾ ಪತ್ರ ಹಾಗೂ ಪರಿಶೀಲನಾ ಪ್ರಮಾಣ ಪತ್ರಗಳಲ್ಲಿ ವಿವರಗಳನ್ನು ಭರ್ತಿ ಮಾಡಿ, ಸಂಬಂಧಿಸಿದ ಅಧಿಕಾರಿಗಳ ದೃಢೀಕರಣದೊಂದಿಗೆ ಮೂಲ ಪ್ರಮಾಣ ಪತ್ರವನ್ನು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

3) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

4) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳನ್ನು ಮೀರಿರಬಾರದು.

5) ಅಭ್ಯರ್ಥಿಯ ಕೌಟುಂಬಿಕ ವಾರ್ಷಿಕ ವರಮಾನ 15,000/–ಕ್ಕೆ ಮೀರಿರಬಾರದು. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮದ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ.

6) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ತಿಂಗಳಿಗೆ ರೂ.1000/–ಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.

7) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಸಮಿತಿಯು ಪಬ್ಲಿಕ್ ಪ್ರಾಸಿಕ್ಯೂಟರ್/ ಸರ್ಕಾರಿ ವಕೀಲರು ಅಥವಾ 20 (ಇಪ್ಪತ್ತು) ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿಕೊಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ದನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

9) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟು ಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10ರ ಬಡ್ಡಿಯೊಂದಿಗೆ ಭೂ ಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

10) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ರಾಮನಗರ ಜಿಲ್ಲೆ, ಪಿ.ಎಲ್.ಡಿ. ಬ್ಯಾಂಕ್ ರಸ್ತೆ, ಐಜೂರು, ರಾಮನಗರ ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

11) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯ ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

12) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

13) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

14) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ:14.08.2008.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಕಲ್ಯಾಣ ಇಲಾಖೆ, ರಾಮನಗರ ಜಿಲ್ಲೆ, ರಾಮನಗರ.

ಪಿ.ಆರ್.849

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಾರ್ಯಾಲಯ, ರಾಯಚೂರು**

**ಪ್ರಕಟಣೆ**

**ಸಂಖ್ಯೆ: ಜಿಸಕಅರಾ/ ಕಾಪತ/ ಸಿಆರ್/6/2008–09/1220, ದಿನಾಂಕ:14ನೇ ಜುಲೈ, 2008**

**ವಿಷಯ:** 2008–09ನೇ ಸಾಲಿನಲ್ಲಿ ಕಾನೂನು ಪದವೀಧರರನ್ನು ಆಡಳಿತ ನ್ಯಾಯಾಧಿಕರಣ ತರಬೇತಿಗಾಗಿ ಆಯ್ಕೆ ಮಾಡುವ ಕುರಿತು.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಎಲ್/68/ಎಸ್‌ಡಬ್ಲ್ಯೂಎಲ್–89, ಬೆಂಗಳೂರು ದಿನಾಂಕ:02.11.1990 ರ ಪ್ರಕಾರ.

2) ಸರ್ಕಾರಿ ಆದೇಶ ಸಂಖ್ಯೆ: ಸಕಿ/349/ಪಕವಿ/2006 ಬೆಂಗಳೂರು, ದಿನಾಂಕ:28.01.2006.

ಕರ್ನಾಟಕ ಸರ್ಕಾರದ ಆದೇಶದ ಪ್ರಕಾರ 2008–09ನೇ ಸಾಲಿಗೆ ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧಿಕರಣ ತರಬೇತಿ ನೀಡುವ ಕಾರ್ಯಕ್ರಮವಿರುತ್ತದೆ. ಆದಕಾರಣ ಅರ್ಹ ಪರಿಶಿಷ್ಟ ಜಾತಿಯ ಕಾನೂನು ಪದವೀಧರರು ದಿನಾಂಕ:30.07.2008ರೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ರಾಯಚೂರುರವರ ಕಾರ್ಯಾಲಯಕ್ಕೆ ಈ ಕೆಳಗೆ ಕಾಣಿಸಿದ ದಾಖಲೆಗಳೊಂದಿಗೆ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಲು ತಿಳಿಸಲಾಗಿದೆ. ಅರ್ಜಿಯ ನಮೂನೆಯನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರಾಯಚೂರುರವರ ಕಛೇರಿಯ ವೇಳೆಯಲ್ಲಿ ಉಚಿತವಾಗಿ ಪಡೆಯಬಹುದು. ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರಾಯಚೂರುರವರ ಕಛೇರಿಯಲ್ಲಿ ಸಂಪರ್ಕಿಸಿ ವಿವರಗಳನ್ನು ಪಡೆಯತಕ್ಕದ್ದು.

1) ಅರ್ಜಿದಾರರು ಪರಿಶಿಷ್ಟ ಜಾತಿಯವರಾಗಿರಬೇಕು.

2) ಅರ್ಜಿಯ ಜೊತೆಗೆ ತಹಶೀಲ್ದಾರರಿಂದ ಪಡೆದ ಜಾತಿ ಪ್ರಮಾಣ ಪತ್ರ ದೃಢೀಕೃತ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

3) ಅರ್ಜಿಯ ಜೊತೆಗೆ ತಹಶೀಲ್ದಾರರಿಂದ ಪಡೆದ ಆದಾಯ ಪ್ರಮಾಣ ಪತ್ರದ ದೃಢೀಕರಣ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

4) ಕಾನೂನು ತರಬೇತಿಯು ರಾಯಚೂರು ಜಿಲ್ಲೆಗೆ ಮಾತ್ರ ಸೀಮಿತವಾಗಿದ್ದು, ತರಬೇತಿಯನ್ನು ರಾಯಚೂರು ಜಿಲ್ಲೆಯಲ್ಲಿ ಕೊಡಲಾಗುವುದು.

5) ತರಬೇತಿಯ ಅವಧಿಯು ನಾಲ್ಕು ವರ್ಷವಿದ್ದು, ಈ ಅವಧಿಯಲ್ಲಿ ಪ್ರತಿ ತಿಂಗಳಿಗೆ ರೂ.1,000/– ರಂತೆ ಶಿಷ್ಯ ವೇತನ ಕೊಡಲಾಗುವುದು. ತರಬೇತಿಯನ್ನು ಮಧ್ಯದಲ್ಲಿ ಬಿಟ್ಟ ಪಕ್ಷದಲ್ಲಿ ಅಲ್ಲಿಯವರೆಗೆ ಪಾವತಿಸಿದ ಶಿಷ್ಯವೇತನವನ್ನು ಭೂಕಂದಾಯ ರೂಪದಲ್ಲಿ ಕಾನೂನಿನ ಪ್ರಕಾರ ವಸೂಲಿ ಸರ್ಕಾರಕ್ಕೆ ವಾಪಸ್ಸು ಕಟ್ಟಬೇಕಾಗುತ್ತದೆ.

6) ಅರ್ಜಿಗಳನ್ನು ದಿನಾಂಕ:30.07.2008 ರೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರಾಯಚೂರು ರವರಿಗೆ ಸಲ್ಲಿಸತಕ್ಕದ್ದು.

7) ಜೂನ್ 2008ಕ್ಕೆ ತರಬೇತಿ ಅರ್ಜಿದಾರರ ವಯಸ್ಸು 35ಕ್ಕೆ ಮೀರಿರಬಾರದು.

8) ದಿನಾಂಕ ಜೂನ್ 2008 ರ ಒಳಗಾಗಿ 2 ವರ್ಷದೊಳಗೆ ಕಾನೂನು ಪದವಿಯನ್ನು ಪಾಸಾದ ಅಭ್ಯರ್ಥಿಗಳು ಮಾತ್ರ ಅರ್ಜಿಗಳನ್ನು ಹಾಕತಕ್ಕದ್ದು ಕಾನೂನು ಪದವಿಯಲ್ಲಿ ಪಾಸಾದ ಅಭ್ಯರ್ಥಿಗಳು ಎಲ್ಲಾ ಮೂಲ ದಾಖಲೆಯ ನಕಲು ಪ್ರತಿಗಳಿಗೆ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

9) ತರಬೇತಿಗೆ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ 7 ಆಯ್ಕೆ ಸಮಿತಿಯಲ್ಲಿ ಸಂದರ್ಶನ ಮುಖಾಂತರ ಆಯ್ಕೆ ಮಾಡಲಾಗುತ್ತಿದೆ.

ಅಪೂರ್ಣ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು,
ರಾಯಚೂರು.

**ಅನುಬಂಧ–11ರ ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಂ:68: ಎನ್‌ಇಡಬ್ಲ್ಯೂ:89, ದಿನಾಂಕ:02.11.1990 ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ಆಡಳಿತದಲ್ಲಿ ನ್ಯಾಯಾಧೀಕರಣ ತರಬೇತಿ ನೀಡುವ ಬಗ್ಗೆ.**

ಗೆ

ಕಾರ್ಯದರ್ಶಿಗಳು,
ಜಿಲ್ಲಾ ಮಟ್ಟದಲ್ಲಿ ಕಾನೂನು ಪದವೀಧರರನ್ನು
ಆಡಳಿತ ನ್ಯಾಯಾಧೀಕರಣದಲ್ಲಿ ಆಯ್ಕೆಮಾಡುವ
ಆಯ್ಕೆ ಸಮಿತಿ, ರಾಯಚೂರು.

ಭಾವ ಚಿತ್ರ

ಮಾನ್ಯರೆ

ನಿಮ್ಮ ಪತ್ರಿಕೆ ಪ್ರಕಟಣೆ ಜಾಹೀರಾತು_______________ಕರ್ನಾಟಕ ಗೆಜೆಟೆಡ್ ದಿನಾಂಕ:_________ರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡುವ ಅರ್ಜಿ ಆಹ್ವಾನಿಸಿದಂತೆ, ನಾನು ಸದರಿ ತರಬೇತಿಯನ್ನು ಪಡೆಯಲು ಅರ್ಜಿಯನ್ನು ದ್ವಿಪ್ರತಿಯಲ್ಲಿ ಈ ಕೆಳಕಂಡಂತೆ ಮಾಹಿತಿಯನ್ನು ಸಲ್ಲಿಸುತ್ತೇನೆ. ಹಾಗೂ ಸಲ್ಲಿಸಿರುವ ಮಾಹಿತಿಯು ಸತ್ಯವೆಂದು ದೃಢೀಕರಿಸುತ್ತೇನೆ.

ಸ್ಥಳ: ತಮ್ಮ ನಂಬುಗೆಯ

ದಿನಾಂಕ: ಅರ್ಜಿದಾರರ ಸಹಿ

**ಅರ್ಜಿ ನಮೂನೆ**

| | | |
|---|---|---|
| ಅ) | ಅಭ್ಯರ್ಥಿಯ ಹೆಸರು (ಬಿಡಿ ಅಕ್ಷರಗಳಲ್ಲಿ) | |
| 2) | ವಿಳಾಸ (ಬಿಡಿ ಅಕ್ಷರಗಳಲ್ಲಿ) | |
| 3) | ತಂದೆ: ಪೋಷಕರ: ಗಂಡನ ಹೆಸರು ವಿಳಾಸ ಮತ್ತು ವೃತ್ತಿ: | |
| 4) | ಹುಟ್ಟಿದ ದಿನಾಂಕ (ಎಸ್ಎಸ್ಎಲ್ಸಿ ಅಂಕಪಟ್ಟಿಯನ್ನು ದೃಢೀಕರಿಸಿ ಲಗತ್ತಿಸಬೇಕು) | |
| 5) | ಎ) ಹುಟ್ಟಿದ ಸ್ಥಳ, ಜಿಲ್ಲೆ ಮತ್ತು ರಾಜ್ಯ: | |
| | ಬಿ) ಈಗ ವಾಸಿಸುತ್ತಿರುವ ಜಿಲ್ಲೆ ಮತ್ತು ರಾಜ್ಯದ ಹೆಸರು | |
| 6) | ಎ) ನೀವು ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಇತರೆ ಹಿಂದುಳಿದ ವರ್ಗಕ್ಕೆ ಸೇರಿದಲ್ಲಿ ಜಾತಿ ಬಗ್ಗೆ ನಮೂದಿಸುವುದು. | |
| | ಬಿ) ಮೇಲೆ ತಿಳಿಸಿದ ವಿಷಯದಲ್ಲಿ ಹೌದು ಅಂದಿದ್ದಲ್ಲಿ ಸಕ್ಷಮ ಪ್ರಾಧಿಕಾರಿಗಳಿಂದ ಅಂಗೀಕೃತ ಜಾತಿ ಪ್ರಮಾಣ ಪತ್ರವನ್ನು ದೃಢೀಕರಿಸಿ ಲಗತ್ತಿಸಬೇಕು. | |
| ಬಿ–2 | ಆದಾಯ ಪ್ರಮಾಣ ಪತ್ರ ಲಗತ್ತಿಸಿದಲ್ಲಿ ಈ ಕೆಳಕಂಡ ವಿವರಗಳನ್ನು ಸಲ್ಲಿಸುವುದು. | |
| | 1) ಅರ್ಜಿದಾರರ ಆದಾಯ | |
| | 2) ವೃತ್ತಿಯಿಂದ ಬಂದಂತಹ ಆದಾಯ ಅಥವಾ ವೇತನ | |
| | 3) ಇನ್ನಿತರ ವೇತನ | |
| ಬಿ–3 | ತಂದೆ ತಾಯಿಗಳ ಆದಾಯ<br>1) ಉದ್ಯೋಗ ಅಥವಾ ನಿವೃತ್ತಿ ವೇತನದಿಂದ ಬಂದಂತಹ ಆದಾಯ | |
| | 2) ಜಮೀನು ಅಥವಾ ಕಟ್ಟಡಗಳಿಂದ ಬಂದಂತಹ ಆದಾಯ | |
| | 3) ಇನ್ನಿತರೆ ವೇತನದಿಂದ ಬಂದಂತಹ ಆದಾಯ | |
| 6–3 | ಗಂಡ:ಹೆಂಡತಿಯ ಆದಾಯ<br>1) ವೃತ್ತಿ ಮತ್ತು ವೇತನದಿಂದ ಬಂದಂತಹ ಆದಾಯ | |
| | 2) ಇನ್ನಿತರೆ ಆದಾಯ | |
| 7) | ಅ) ಗಂಡು: ಹೆಣ್ಣು | |
| | ಆ) ಮದುವೆಯಾಗಿದೆಯೇ? ಇಲ್ಲವೆ? | |
| | ಇ) ಮದುವೆಯಾಗಿದ್ದಲ್ಲಿ ಒಂದಕ್ಕಿಂತ ಹೆಚ್ಚು ನಿಮಗೆ ಪತ್ನಿಯರಿದ್ದಾರೆಯೇ | |
| | ಈ) ಈಗಾಗಲೇ ಪತ್ನಿಯನ್ನು ಹೊಂದಿದ್ದು, ಇನ್ನೊಬ್ಬರನ್ನು ಮದುವೆಯಾಗಿದ್ದೀರ? | |

| | | |
|---|---|---|
| 1) | ಕಾಲಂರಲ್ಲಿಯ ಮಾಹಿತಿಯ ದೃಢೀಕರಣವಾಗಿ ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಹುಟ್ಟಿದ ದಿನಾಂಕವನ್ನು ನಮೂದಿಸಿದ ಅಂಕಪಟ್ಟಿಯನ್ನು ಲಗತ್ತಿಸುವುದು | |
| 2) | ಕಾಲಂ ಸಂಖ್ಯೆ (8) (ಬಿ) ತಿಳಿಸಿರುವ ವಿದ್ಯಾರ್ಹತೆ ಬಗ್ಗೆ ಅಂಕಪಟ್ಟಿಯನ್ನು ದೃಢೀಕರಿಸಿ ಲಗತ್ತಿಸುವುದು | |
| 3) | ಕಾಲಂ ನಂ–8(ಸಿ) ಯಲ್ಲಿ ತಿಳಿಸಿರುವಂತೆ ಹೆಚ್ಚಿನ ವಿದ್ಯಾರ್ಹತೆಯ ಬಗ್ಗೆ ಪ್ರಮಾಣ ಪತ್ರಗಳನ್ನು ದೃಢೀಕರಿಸಿ ಲಗತ್ತಿಸಬೇಕು. | |
| 4) | ಕಾಲಂ ಸಂಖ್ಯೆ–10 ರಲ್ಲಿ ತಿಳಿಸಿರುವಂತೆ ಸೇವೆಯ ಅವಧಿಯ ಬಗ್ಗೆ ದೃಢೀಕರಣ ಪ್ರಮಾಣ ಪತ್ರವನ್ನು ಲಗತ್ತಿಸುವುದು. | |

ನಾನು ಈ ಮೇಲೆ ಒದಗಿಸಿರುವ ಮಾಹಿತಿಯನ್ನು ಸತ್ಯವೆಂದು ದೃಢೀಕರಿಸುತ್ತೇನೆ. ನಾನು ಈ ನಾಲ್ಕು ವರ್ಷಗಳ ತರಬೇತಿಯನ್ನು ಪೂರ್ಣಗೊಳಿಸುತ್ತೇನೆಂದು ತಿಳಿಸುತ್ತೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ

ಪಿ.ಆರ್.855

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ತುಮಕೂರು**

**ಪ್ರಕಟಣೆ**

**ಸಂಖ್ಯೆ: ಬಿಸಿಎಂ–2:ಮಅಕಾತ: ಸಿಆರ್–22/ 2008–09, ದಿನಾಂಕ:8ನೇ ಜುಲೈ, 2008**

**ವಿಷಯ:** 2008–09ನೇ ಸಾಲಿನ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

ತುಮಕೂರು ಜಿಲ್ಲೆಯ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ 2008–09ನೇ ಸಾಲಿನಲ್ಲಿ ವಕೀಲ ವೃತ್ತಿಯಲ್ಲಿ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಅರ್ಜಿ ಸಲ್ಲಿಸಬಹುದು. ಅರ್ಜಿಯನ್ನು ತುಮಕೂರು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಅವಶ್ಯಕ ದಾಖಲಾತಿಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ:16.08.2008.

**ನಿಬಂಧನೆಗಳು:**

1) ಎಲ್.ಎಲ್.ಬಿ. ಪರೀಕ್ಷೆಯನ್ನು ಪಾಸು ಮಾಡಿದ ಮತೀಯ ಅಲ್ಪಸಂಖ್ಯಾತ ಅಭ್ಯರ್ಥಿಯಾಗಿರಬೇಕು, ವಕೀಲ ವೃತ್ತಿ ಅಭ್ಯಾಸಕ್ಕೆ (ಪ್ರಾಕ್ಟೀಸ್) ನಿಗದಿಪಡಿಸಿರುವ ಅರ್ಹತೆ ಹೊಂದಿರಬೇಕು. ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳ ಅವಧಿಯೊಳಗೆ ಕಾನೂನು ಪದವಿಯ ಪರೀಕ್ಷೆಯನ್ನು ಪಾಸು ಮಾಡಿರುವ ಅಭ್ಯರ್ಥಿಗಳು ಮಾತ್ರ ತರಬೇತಿಗೆ ಅರ್ಜಿ ಸಲ್ಲಿಸಲು ಅರ್ಹತೆ ಹೊಂದಿರುತ್ತಾರೆ.

2) ಸರ್ಕಾರಿ ಆದೇಶ ಸಂಖ್ಯೆ: ಸಕಇ 225 ಬಿಸಿಎ 2000, ದಿನಾಂಕ:30.02.2002ರಲ್ಲಿ ವರ್ಗೀಕರಣ ಮಾಡಿರುವ ಪ್ರಕಾರ ವರ್ಗ 1,2ಎ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳಾಗಿರಬೇಕು. ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಕಇ 222 ಬಿಸಿಎ–04 ದಿನಾಂಕ:20.09.2004 ರ ಆದೇಶದಲ್ಲಿ ಸರ್ಕಾರವು ನಿಗದಿಪಡಿಸಿರುವ ನಮೂನೆಗಳಲ್ಲಿ ಜಾತಿ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.

3) ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ.15,000/– ಗಳನ್ನು ಮೀರಿರಬಾರದು ಪ್ರವರ್ಗ–1 ರಡಿಯಲ್ಲಿ ಬರುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ.

4) ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ ಆಗಾಗ್ಗೆ ಸರ್ಕಾರದಿಂದ ನಿಗದಿಪಡಿಸಿದಂತೆ ಮಾರ್ಪಾಡಾಗುತ್ತದೆ.

5) ತರಬೇತಿ ಅವಧಿ 4 ವರ್ಷಗಳಾಗಿದ್ದು ತರಬೇತಿಯ ಅವಧಿಯಲ್ಲಿ ತರಬೇತಿದಾರರಿಗೆ ಮಾಹೆಯಾನ ರೂ.1000 ರಂತೆ ತರಬೇತಿ ಭತ್ಯೆ ನೀಡಲಾಗುವುದು.

6) ಈ ಸೌಲಭ್ಯ ಪಡೆಯಲಿಚ್ಛಿಸುವ ಅಭ್ಯರ್ಥಿಯ ವಯೋಮಿತಿ 30 ವರ್ಷಕ್ಕೆ ಮೀರಿರಬಾರದು. ಪ್ರವರ್ಗ 1ರ ಅಭ್ಯರ್ಥಿಗಳಿಗೆ ವಯೋಮಿತಿ 31 ವರ್ಷ ಮೀರಬಾರದು.

7) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

8) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಜಾತಿ ಆದಾಯ ಪ್ರಮಾಣಪತ್ರ ನೀಡಿ ಆಯ್ಕೆಯಾಗಿರುವುದು ಕಂಡುಬಂದಲ್ಲಿ ಶಿಕ್ಷೆಗೆ ಗುರಿಪಡಿಸಿ ಸ್ಟೈಫಂಡ್ ನೀಡಿರುವ ಒಟ್ಟು ಹಣದ ಜೊತೆಗೆ ಶೇ.10 ಬಡ್ಡಿ ಸೇರಿಸಿ ಭೂಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು.

9) ಸದಸ್ಯ ಕಾರ್ಯದರ್ಶಿಯವರು ಸ್ವೀಕರಿಸಿದ ಅರ್ಜಿಗಳನ್ನು ಪರಿಶೀಲನೆ ಮಾಡಿ ಅಪೂರ್ಣ ಮಾಹಿತಿ ಹೊಂದಿರುವ ಹಾಗೂ ಕೇಳಿರುವ ಮಾಹಿತಿಯನ್ನು ಅರ್ಜಿ ಸಂಗಡ ಒದಗಿಸದ ಮತ್ತು ಅವಧಿ ಮೀರಿದಂತಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು.

ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಕಲ್ಯಾಣ ಇಲಾಖೆ, ತುಮಕೂರು.

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ತುಮಕೂರು**

**ಪ್ರಕಟಣೆ**

**ಸಂಖ್ಯೆ: ಬಿಸಿಎಂ–2:ಮಅಕಾತ: ಸಿಆರ್–23/ 2008–09, ದಿನಾಂಕ:8ನೇ ಜುಲೈ, 2008**

**ವಿಷಯ:** 2008–09ನೇ ಸಾಲಿನ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

ತುಮಕೂರು ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ 2008–09ನೇ ಸಾಲಿನಲ್ಲಿ ವಕೀಲ ವೃತ್ತಿಯಲ್ಲಿ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಮತೀಯ ಅಲ್ಪಸಂಖ್ಯಾತ ವರ್ಗಗಳಿಗೆ ಸೇರಿದ ಮುಸ್ಲಿಂ, ಕ್ರಿಶ್ಚಿಯನ್, ಬೌದ್ಧ, ಜೈನ್ ಹಾಗೂ ಪಾರ್ಸಿ ಜನಾಂಗಕ್ಕೆ ಸೇರಿದ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಅರ್ಜಿ ಸಲ್ಲಿಸಬಹುದು. ಅರ್ಜಿಯನ್ನು ತುಮಕೂರು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಅವಶ್ಯಕ ದಾಖಲಾತಿಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ:16.08.2008.

**ನಿಬಂಧನೆಗಳು:**

1) ಎಲ್.ಎಲ್.ಬಿ. ಪರೀಕ್ಷೆಯನ್ನು ಪಾಸು ಮಾಡಿದ ಮತೀಯ ಅಲ್ಪಸಂಖ್ಯಾತ ಅಭ್ಯರ್ಥಿಯಾಗಿರಬೇಕು, ವಕೀಲ ವೃತ್ತಿ ಅಭ್ಯಾಸಕ್ಕೆ (ಪ್ರಾಕ್ಟೀಸ್) ನಿಗದಿಪಡಿಸಿರುವ ಅರ್ಹತೆ ಹೊಂದಿರಬೇಕು. ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳ ಅವಧಿಯೊಳಗೆ ಕಾನೂನು ಪದವಿಯ ಪರೀಕ್ಷೆಯನ್ನು ಪಾಸು ಮಾಡಿರುವ ಅಭ್ಯರ್ಥಿಗಳು ಮಾತ್ರ ತರಬೇತಿಗೆ ಅರ್ಜಿ ಸಲ್ಲಿಸಲು ಅರ್ಹತೆ ಹೊಂದಿರುತ್ತಾರೆ.

2) ಅಭ್ಯರ್ಥಿಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68 ಎಸ್‌ಇಡಬ್ಲ್ಯೂ 89, ದಿನಾಂಕ:02.11.1990 ರನ್ವಯ ಆಯ್ಕೆ ಮಾಡಲಾಗುವುದು. ಕಾನೂನು ತರಬೇತಿ ಪಡೆಯುವ ಅಭ್ಯರ್ಥಿಯು ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ, ಸಿಖ್ ಮತ್ತು ಪಾರ್ಸಿ ಸಮುದಾಯಗಳಿಗೆ ಸೇರಿದವರಾಗಿದ್ದು ರಾಜ್ಯದ ನಿವಾಸಿಯಾಗಿರಬೇಕು.

3) ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ.15,000/– ಗಳನ್ನು ಮೀರಿರಬಾರದು ಪ್ರವರ್ಗ–1 ರಡಿಯಲ್ಲಿ ಬರುವ ಮತೀಯ ಅಲ್ಪಸಂಖ್ಯಾತ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ.

4) ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ ಆಗಾಗ್ಗೆ ಸರ್ಕಾರದಿಂದ ನಿಗದಿಪಡಿಸಿದಂತೆ ಮಾರ್ಪಾಡಾಗುತ್ತದೆ.

5) ತರಬೇತಿ ಅವಧಿ 4 ವರ್ಷಗಳಾಗಿದ್ದು ತರಬೇತಿಯ ಅವಧಿಯಲ್ಲಿ ತರಬೇತಿದಾರರಿಗೆ ಮಾಹೆಯಾನ ರೂ.1000 ರಂತೆ ತರಬೇತಿ ಭತ್ಯೆ ನೀಡಲಾಗುವುದು.

6) ಈ ಸೌಲಭ್ಯ ಪಡೆಯಲಿಚ್ಛಿಸುವ ಅಭ್ಯರ್ಥಿಯ ವಯೋಮಿತಿ 30 ವರ್ಷಕ್ಕೆ ಮೀರಿರಬಾರದು.

7) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

8) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಜಾತಿ ಆದಾಯ ಪ್ರಮಾಣಪತ್ರ ನೀಡಿ ಆಯ್ಕೆಯಾಗಿರುವುದು ಕಂಡುಬಂದಲ್ಲಿ ಶಿಕ್ಷೆಗೆ ಗುರಿಪಡಿಸಿ ಸ್ಟೈಫಂಡ್ ನೀಡಿರುವ ಒಟ್ಟು ಹಣದ ಜೊತೆಗೆ ಶೇ.10 ಬಡ್ಡಿ ಸೇರಿಸಿ ಭೂಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು.

9) ಸದಸ್ಯ ಕಾರ್ಯದರ್ಶಿಯವರು ಸ್ವೀಕರಿಸಿದ ಅರ್ಜಿಗಳನ್ನು ಪರಿಶೀಲನೆ ಮಾಡಿ ಅಪೂರ್ಣ ಮಾಹಿತಿ ಹೊಂದಿರುವ ಹಾಗೂ ಕೇಳಿರುವ ಮಾಹಿತಿಯನ್ನು ಅರ್ಜಿ ಸಂಗಡ ಒದಗಿಸದ ಮತ್ತು ಅವಧಿ ಮೀರಿದಂತಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು.

ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಕಲ್ಯಾಣ ಇಲಾಖೆ, ತುಮಕೂರು.

ಪಿ.ಆರ್.857

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳ ಕಛೇರಿ, ಬೀದರ**

**ಪ್ರಕಟಣೆ**

**ಸಂಖ್ಯೆ: ಬಿಸಿಎಂ/ಕಾಪತಭ/ಸಿಆರ್–17/2008–2009, ದಿನಾಂಕ:23ನೇ ಜೂನ್, 2008**

2008–2009ನೇ ಸಾಲಿನ ಬೀದರ ಜಿಲ್ಲೆಯಲ್ಲಿ ಕಾನೂನು ಪದವಿ ಪಡೆದಿರುವ 10 ಹಿಂದುಳಿದ ವರ್ಗಗಳ ಮತ್ತು 2 ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಸರ್ಕಾರಿ ವಕೀಲರ ಅಥವಾ 20 ವರ್ಷಗಳಿಗಿಂತ ಹೆಚ್ಚಿನ ಅನುಭವ ಉಳ್ಳ ವಕೀಲರಿಂದ ತರಬೇತಿ ಕೊಡಿಸಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ತರಬೇತಿಯ ಅವಧಿಯು 4 ವರ್ಷಗಳಿದ್ದು ತರಬೇತಿ ಅವಧಿಯಲ್ಲಿ ಮಾಸಿಕ ರೂ.1000/– ತರಬೇತಿ ಭತ್ಯೆ ನೀಡಲಾಗುವುದು. ಅರ್ಜಿಗಳನ್ನು ಸಲ್ಲಿಸಬಯಸುವವರು ಈ ಕೆಳಕಂಡ ಷರತ್ತುಗಳನ್ನು ಪೂರೈಸಿರಬೇಕು.

1) ಅಭ್ಯರ್ಥಿಯು ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ, 3ಎ, 3ಬಿ ಹಾಗೂ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ, ಸಿಖ್ ಹಾಗೂ ಪಾರ್ಸಿ ಸಮುದಾಯಗಳಲ್ಲಿ ಯಾವುದಾದರೊಂದು ಸಮುದಾಯಕ್ಕೆ ಸೇರಿದ್ದು ಬೀದರ ಜಿಲ್ಲೆಯ ನಿವಾಸಿಯಾಗಿರಬೇಕು.

2) ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ.15,000/– ಕ್ಕೆ ಮೀರಿರಬಾರದು. ಪ್ರವರ್ಗ–1ರಡಿಯಲ್ಲಿ ಬರುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ.

3) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

4) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕಡೆಯ ದಿನಾಂಕಕ್ಕೆ ಪ್ರವರ್ಗ–2ಎ, 3ಎ ಮತ್ತು 3ಬಿ ಹಾಗೂ ಅಲ್ಪಸಂಖ್ಯಾತರ ಅಭ್ಯರ್ಥಿಯ ವಯಸ್ಸು 30ಕ್ಕೆ ಹಾಗೂ ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳ ವಯಸ್ಸು 31ಕ್ಕೆ ಮೀರಿರಬಾರದು. ಮತ್ತು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯು 2 ವರ್ಷಗಳ ಅವಧಿಯೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

5) ಪ್ರವರ್ಗ–1ರ ಅಭ್ಯರ್ಥಿಗಳಿಗೆ ಆಧ್ಯತೆ ನೀಡಲಾಗುವುದು.

ಕಾರಣ ಅರ್ಹ ಅಭ್ಯರ್ಥಿಗಳು ಅರ್ಜಿ ನಮೂನೆಗಳನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಪಡೆದು ಕೆಳಕಂಡ ದಾಖಲೆಗಳೊಂದಿಗೆ ಜಿಲ್ಲಾ ಅಧಿಕಾರಿಗಳು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಬಸವನಗರ, ಬೀದರ ಇವರಿಗೆ ಈ ಪ್ರಕಟಣೆಯು ಕರ್ನಾಟಕ ಗೆಜೆಟ್‌ನಲ್ಲಿ ಪ್ರಕಟಣೆಯಾದ ದಿನಾಂಕದಿಂದ 30 ದಿನಗಳೊಳಗೆ ತಲುಪುವಂತೆ ಸಲ್ಲಿಸುವುದು.

1) ಕಾನೂನು ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ದೃಢೀಕೃತ ಅಂಕಪಟ್ಟಿ.

2) ಸಂಬಂಧ ಪಟ್ಟ ತಹಶೀಲ್ದಾರರಿಂದ ನೀಡಲ್ಪಟ್ಟ ಜಾತಿ ಆದಾಯ ಪ್ರಮಾಣ ಪತ್ರ.

3) ವಾಸಸ್ಥಳ ಪ್ರಮಾಣ ಪತ್ರ.

4) ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿದ ಪ್ರಮಾಣ ಪತ್ರ.

ಅಪೂರ್ಣವಾದ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಹೆಚ್ಚಿನ ಮಾಹಿತಿಗಾಗಿ ಈ ಕೆಳಗೆ ಸಹಿ ಮಾಡಿದವರನ್ನು ಕಛೇರಿ ಸಮಯದಲ್ಲಿ ಸಂಪರ್ಕಿಸಬಹುದು.

ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳು, ಬೀದರ.

ಪಿ.ಆರ್.873

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,**
**ಬೆಂಗಳೂರು (ಗ್ರಾ) ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂಖ್ಯೆ: ಡಿಬಿಸಿಎಂ:ಬೆಂಗ್ರಾ:ಬಿ3:ಸಿಆರ್–2:2008–09, ದಿನಾಂಕ:10ನೇ ಜುಲೈ, 2008**

**ವಿಷಯ:** 2008–09ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹಿಂದುಳಿದ ವರ್ಗಗಳ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 60 ಎಸ್.ಇ.ಡಬ್ಲ್ಯೂ 89, ದಿನಾಂಕ:02.11.1990.

2) ಸರ್ಕಾರಿ ಆದೇಶ ಸಂಖ್ಯೆ: ಸಕಇ 116 ಬಿಎಂಎಸ್ 99, ದಿನಾಂಕ:07.10.1999.

3) ಸರ್ಕಾರಿ ಆದೇಶ ಸಂಖ್ಯೆ: ಸಕಇ 446, ಬಿಎಂಎಸ್ 2005, ಬೆಂಗಳೂರು ದಿನಾಂಕ:01.12.2005.

2008–09ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ (ವರ್ಗ–1, 2ಎ, 3ಎ ಮತ್ತು 3ಬಿ) ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ 4 ವರ್ಷಗಳ ಅವಧಿಗೆ ತರಬೇತಿಗೆ ಅರ್ಹ

ಅಭ್ಯರ್ಥಿಗಳ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ನಿಗದಿತ ಅವಧಿಯೊಳಗೆ ಕಛೇರಿ ವೇಳೆಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಡಾ:ಅಂಬೇಡ್ಕರ್ ಬೀದಿ, ಬೆಂಗಳೂರು ಇಲ್ಲಿಗೆ ದಿನಾಂಕ:14.08.2008 ರೊಳಗೆ ಸಲ್ಲಿಸುವುದು.

**ನಿಬಂಧನೆಗಳು**

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿಯನ್ನು ಮುಗಿಸಿ 2 (ಎರಡು) ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ:30.03.2002ರ ಆದೇಶದ ಅನುಸಾರ ಹಿಂದುಳಿದ ವರ್ಗ–1, 2ಎ, 3ಎ ಮತ್ತು 3ಬಿ ವರ್ಗೀಕರಣಕ್ಕೆ ಒಳಪಟ್ಟಿರಬೇಕು. ಹಾಗೂ ಮೇಲ್ಕಂಡ ವರ್ಗಗಳಿಗೆ ನಿಗದಿಪಡಿಸಲಾದ ಜಾತಿ ಆದಾಯ ಪ್ರಮಾಣ ಪತ್ರಗಳೊಂದಿಗೆ ವಿವರಗಳನ್ನು ಭರ್ತಿ ಮಾಡಿ, ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

3) ಪ್ರವರ್ಗ–1ನ್ನು ಹೊರತುಪಡಿಸಿ ಇತರೆ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ರೂ.15,000/–ಗಳ ವಾರ್ಷಿಕ ಆದಾಯ ಮಿತಿಯನ್ನು ನಿಗದಿಪಡಿಸಿದೆ.

4) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು. (ಪ್ರತಿ ಲಗತ್ತಿಸಬೇಕು)

5) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳನ್ನು ಮೀರಿರಬಾರದು. ಅಂದರೆ ವರ್ಗ–1ರ ಅಭ್ಯರ್ಥಿಗಳಿಗೆ 1 ವರ್ಷ ರಿಯಾಯಿತಿ ಇದ್ದು, ಅವರ ವಯಸ್ಸು 31 ವರ್ಷಗಳು ಮೀರಿರಬಾರದು.

6) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಅವಧಿಯೊಳಗೆ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಹಾಗೂ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟುಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10ರ ಬಡ್ಡಿಯೊಂದಿಗೆ ಭೂ ಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಆದರೆ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರದಲ್ಲಿ ವಿವಿಧ ಹುದ್ದೆಗಳಿಗೆ ನೇಮಕಾತಿ ಹೊಂದಿದ ಅಭ್ಯರ್ಥಿಗಳಿಗೆ ಅನ್ವಯಿಸುವುದಿಲ್ಲ.

7) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ತಿಂಗಳಿಗೆ ರೂ.1000/–ಗಳ ತರಬೇತಿ ಭತ್ಯೆಯನ್ನು ದಿನಚರಿ ಆಧಾರದ ಮೇರೆಗೆ ನೀಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್/ ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ನಿಯೋಜಿಸಲಾಗುವುದು.

9) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಕಾಲಕಾಲಕ್ಕೆ ಹೊಂದಿರುವ ಸರ್ಕಾರದ ಆದೇಶಗಳಿಗೆ ಬದ್ದನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

10) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

11) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯ ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

12) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

13) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ:14.08.2008.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಕಲ್ಯಾಣ ಇಲಾಖೆ, ಬೆಂಗಳೂರು (ಗ್ರಾ) ಜಿಲ್ಲೆ, ಬೆಂಗಳೂರು.

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,**
**ಬೆಂಗಳೂರು (ಗ್ರಾ) ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂಖ್ಯೆ: ಡಿಬಿಸಿಎಂ:ಬೆಂಗ್ರಾ:ಬಿ3:ಸಿಆರ್–3:2008–09, ದಿನಾಂಕ:10ನೇ ಜುಲೈ, 2008**

**ವಿಷಯ:** 2008–09ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68 ಎಸ್.ಇ.ಡಬ್ಲ್ಯೂ 89, ದಿನಾಂಕ:02.11.1990.
2) ಸರ್ಕಾರಿ ಆದೇಶ ಸಂಖ್ಯೆ: ಸಕಇ 205 ಬಿಎಂಎಸ್ 99, ದಿನಾಂಕ:07.10.1999.
3) ಸರ್ಕಾರಿ ಆದೇಶ ಸಂಖ್ಯೆ: ಸಕಇ 446, ಬಿಎಂಎಸ್ 2005, ಬೆಂಗಳೂರು ದಿನಾಂಕ:01.12.2005.

2008–09ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಖ್ಖರು ಹಾಗೂ ಪಾರ್ಸಿ ಸಮುದಾಯಕ್ಕೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ 4 ವರ್ಷಗಳ ಅವಧಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಹ ಮತೀಯ ಅಲ್ಪಸಂಖ್ಯಾತರಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಬಲ್ಲ ಕಾನೂನು ಪದವೀಧರ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ನಿಗದಿತ ಅವಧಿಯೊಳಗೆ ಕಛೇರಿ ವೇಳೆಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಆಯ್ಕೆ ಸಮಿತಿ ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ಬೀದಿ, ಬೆಂಗಳೂರು, ಇವರ ಕಛೇರಿಯಲ್ಲಿ ದಿನಾಂಕ:14.08.2008 ರೊಳಗೆ ಸಲ್ಲಿಸುವುದು.

**ನಿಬಂಧನೆಗಳು**

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿಯನ್ನು ಮುಗಿಸಿ 2 (ಎರಡು) ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳು ಮತೀಯ ಅಲ್ಪಸಂಖ್ಯಾತರ ಸಮುದಾಯವಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಖ್ಖರು, ಹಾಗೂ ಪಾರ್ಸಿ ಇವುಗಳಿಗೆ ಸೇರಿರಬೇಕು. ಹಾಗೂ ಸರ್ಕಾರದಿಂದ ನಿಗದಿಪಡಿಸಲಾದ ಜಾತಿ ಆದಾಯ ಘೋಷಣಾ ಪತ್ರ ಹಾಗೂ ಪರಿಶೀಲನಾ ಪ್ರಮಾಣ ಪತ್ರಗಳಲ್ಲಿ ವಿವರಗಳನ್ನು ಭರ್ತಿ ಮಾಡಿ, ಸಂಬಂಧಿಸಿದ ಅಧಿಕಾರಿಗಳ ದೃಢೀಕರಣದೊಂದಿಗೆ ಮೂಲ ಪ್ರಮಾಣ ಪತ್ರವನ್ನು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

3) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

4) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳನ್ನು ಮೀರಿರಬಾರದು.

5) ಅಭ್ಯರ್ಥಿಯ ಕೌಟುಂಬಿಕ ವಾರ್ಷಿಕ ವರಮಾನ 15,000/– ಕ್ಕೆ ಮೀರಿರಬಾರದು. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆದರೆ ಕೇಂದ್ರ ಸರ್ಕಾರ/ ರಾಜ್ಯ ಸರ್ಕಾರದಲ್ಲಿ ನೇಮಕಾತಿ ಹೊಂದಿರುವ ಅಭ್ಯರ್ಥಿಗಳಿಗೆ ಅನ್ವಯಿಸುವುದಿಲ್ಲ.

6) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ತಿಂಗಳಿಗೆ 1,000/– ಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.

7) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಸಮಿತಿಯು ಪಬ್ಲಿಕ್ ಪ್ರಾಸಿಕ್ಯೂಟರ್/ ಸರ್ಕಾರಿ ವಕೀಲರು ಅಥವಾ 20 (ಇಪ್ಪತ್ತು ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿಕೊಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ಧನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

9) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟುಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10ರ ಬಡ್ಡಿಯೊಂದಿಗೆ ಭೂ ಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

10) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು–1 ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

11) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯ ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

12) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

13) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

14) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ:14.08.2008.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಕಲ್ಯಾಣ ಇಲಾಖೆ, ಬೆಂಗಳೂರು (ಗ್ರಾ) ಜಿಲ್ಲೆ, ಬೆಂಗಳೂರು.

ಪಿ.ಆರ್.866

## ಕಂದಾಯ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಆರ್‌ಡಿ 539 ಆರ್‌ಎಂಇ 2008, ಬೆಂಗಳೂರು, ದಿನಾಂಕ:7ನೇ ಜುಲೈ, 2008**

ದಿನಾಂಕ:28.06.2008ರಂದು ಹೊರಡಿಸಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 61 ವಾತೆಸಿ 2008 ರನ್ವಯ ಶ್ರೀ ಎಂ.ಡಿ. ಜೈನ್, ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು, (ಮನವಿಗಳು)–1 ಬೆಂಗಳೂರು ಇವರಿಗೆ ವಾಣಿಜ್ಯ ತೆರಿಗೆ ಅಪರ ಆಯುಕ್ತರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು ಇಲ್ಲಿಗೆ ವಾಣಿಜ್ಯ ತೆರಿಗೆ ಸದಸ್ಯರು–1 ಎಂಬುದಾಗಿ ನೇಮಿಸುವ ಸಲುವಾಗಿ ಸದರಿಯವರ ಸೇವೆಯನ್ನು ಕಂದಾಯ ಇಲಾಖೆಯ ವಶಕ್ಕೆ ವಹಿಸಿಕೊಡಲಾಗಿದೆ.

ಶ್ರೀ ಎಂ.ಡಿ.ಜೈನ್, ವಾಣಿಜ್ಯ ತೆರಿಗೆಗಳ ಅಪರ ಆಯುಕ್ತರು, ಬೆಂಗಳೂರು, ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದಲ್ಲಿ ಖಾಲಿ ಇರುವ ವಾಣಿಜ್ಯ ತೆರಿಗೆ ಸದಸ್ಯರು (ಸದಸ್ಯರು–1) ಹುದ್ದೆಯಲ್ಲಿ ಮರು ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಗಂಗಾಧರ**
ರಾಜ್ಯ ಪ್ರತಿನಿಧಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ (ಕೆಎಟಿ ಮತ್ತು ಬಾನಿ)

ಪಿ.ಆರ್.882

## IN THE COURT OF VII ADDL. CHIEF METROPOLITAN MAGISTRATE, BANGALORE CITY

It hereby notified to the public that the Rajajinagar Police Station, Bangalore City have seized the following vehicles as unclaimed and such vehicles are lying in the Police Station as unclaimed so far. Hence the owners of the properties (vehicles) may put their claim one month from the date of this publication.

Bangalore City
Date:

VII Addl. Chief Metropolitan Magistrate,
Bangalore City.

List of unclaimed are lying in Rajajinagar Police Station, Bangalore City which have been seized under C.Misc Case.

| Sl. No. | C.Misc No. & PF No. | Registration No. Type & Colour | Chassis No. | Engine No. |
|---|---|---|---|---|
| 1. | C.Misc No.04/08 PF No.05/08, dated:05.01.2008 | KA-05-X-8241 Suzukisamurai Black colour | 7805F037924 | 7805M085109 |
| 2. | C.Misc No.05/08 PF No.06/08 Dated:05.01.2008 | KA-04-V-6131 Hero Honda, Black Colour | 98JF01539 | 98J17E01408 |

| Sl. No. | C.Misc No. & PF No. | Registration No. Type & Colour | Chassis No. | Engine No. |
|---|---|---|---|---|
| 3. | C.Misc No.06/08, PF No.07/08 Dated:06.01.2008 | KA-06-L-4226 Hero Honda, Black Colour. | 00H20F23540 | 00H18E23591 |
| 4. | C.Misc No.0708 PF No.0808 Dated:06.01.2008 | KA-04-H-4443 Yamaha Red and Yellow Colour | FL96671 | Not found |
| 5. | C.Misc No.08/08 PFNo.10/08 Dated:09.01.2008 | KA-04-E-4956 Kawasaki Bajaj Black Colour | 300119715 | 30E118170 |
| 6. | C.Misc No.0908 PFNo.11/08 Dated:09.01.2008 | KA-29-J-624 Suzuki Max 100 Black Colour | 9912F484895 | 9912M535243 |
| 7. | C.Misc No.25/08 PF No.15/08 Dated:26.01.2008 | KA-03-H-6605 Hero Puch Silver Colour | CA92005 | EA92085 |
| 8. | C.Misc No.26/08 PF No.16/08 Dated:26.01.2008 | KA-04-Q-2445 Hero Puch Black Colour | MD395JIDR | B368000 |
| 9. | C.Misc No.27/08 PF No.17/08 Dated:26.01.2008 | KA-03-J-82 TVS-50-Blue Colour | Not found | 18DA026101 |
| 10. | C.Misc No.28/08 PF No.18/08 Dated:26.01.2008 | CKJ-879 TVS 50 | 08237-00487 | Not Found |
| 11. | C.Misc No.29/08 PF No.19/08 Dt:27.01.08 | KA-03-E-7780 Luna Blue Colour | Not found | 32008540 |
| 12. | C.Misc No. 30/08 PF No.20/08 Dt:27.01.2008 | KA-01-J-3563 Kinetic Honda Black Colour | 436311 | 426030JEMTF |

VII Addl. Chief Metropolitan Magistrate,
Bangalore City.

PR-884

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ಉತ್ತರಕನ್ನಡ, ಕಾರವಾರ**

**ಪ್ರಕಟಣೆ**

**ಸಂಖ್ಯೆ: ಬಿಸಿಎಂ:ಅಸ:ಕಾನೂನು:ಸಿಆರ್–13:2008–09, ದಿನಾಂಕ:17ನೇ ಜುಲೈ, 2008**

**ವಿಷಯ:** 2008–09ನೇ ಸಾಲಿನಲ್ಲಿ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ತರಬೇತಿ ನೀಡುವ ಕುರಿತು.

2008–09ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ವಕೀಲ ವೃತ್ತಿ ಮತ್ತು ಜ್ಯೂಡಿಸಿಯಲ್ ಸೇವೆಗೆ ಸಂಬಂಧಿಸಿದಂತ ನ್ಯಾಯಾಡಳಿತದಲ್ಲಿ 4 ವರ್ಷಗಳ ತರಬೇತಿ ನೀಡುವ ಕುರಿತು ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಿದೆ. ಆಸಕ್ತ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಅರ್ಜಿಗಳನ್ನು ದಿನಾಂಕ:14.08.2008ರ ಒಳಗಾಗಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳು, ಉತ್ತರ ಕನ್ನಡ, ಕಾರವಾರ ರವರಿಗೆ ಸಲ್ಲಿಸತಕ್ಕದ್ದು. ನಿಗದಿತ ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಪಡೆಯಬಹುದಾಗಿದೆ.

**ನಿಬಂಧನೆಗಳು**

1) ಅಭ್ಯರ್ಥಿಯು ಕಾನೂನು ಪದವಿ ಪಾಸು ಮಾಡಿರಬೇಕು. ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದವರಾಗಿರಬೇಕು. (ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ ಮತ್ತು ಪಾರ್ಸಿ) ಸಮುದಾಯಕ್ಕೆ ಸೇರಿದವರಾಗಿದ್ದು ರಾಜ್ಯದ

ನಿವಾಸಿಯಾಗಿರಬೇಕು. ವಕೀಲ ವೃತ್ತಿ ಅಭ್ಯಾಸ (ಪ್ರ್ಯಾಕ್ಟಿಸ್) ನಿಗದಿಪಡಿಸಿರುವ ಅರ್ಹತೆ ಹೊಂದಿದ್ದು ತರಬೇತಿಗೆ ಅರ್ಜಿ ಸಲ್ಲಿಸುವ ದಿನಾಂಕಕ್ಕಿಂತ ಮುಂಚಿತವಾಗಿ ಎರಡು ವರ್ಷದೊಳಗೆ ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೊಂದಾಯಿಸಿಕೊಂಡಿರತಕ್ಕದ್ದು.

2) ಕಾನೂನು ತರಬೇತಿ ಭತ್ಯೆಗಾಗಿ ಜಿಲ್ಲೆಯಿಂದ ಎರಡು ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.

3) ಅಭ್ಯರ್ಥಿಗಳ ಪಾಲಕರು/ ಪೋಷಕರ ವಾರ್ಷಿಕ ಆದಾಯ ಮಿತಿ ರೂ.15,000–00ರ ಒಳಗಿರಬೇಕು. ಪ್ರವರ್ಗ–1 ರಡಿಯಲ್ಲಿ ಬರುವ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ.

4) ತರಬೇತಿ ಅವಧಿಯು ನಾಲ್ಕು ವರ್ಷಗಳು ತರಬೇತಿ ಅವಧಿಯಲ್ಲಿ ಮಾಹೆಯಾನ ರೂ.1,000–00 ದಂತೆ ತರಬೇತಿ ಭತ್ಯೆ ನೀಡಲಾಗುವುದು.

5) ತರಬೇತಿ ಸೌಲಭ್ಯ ಪಡೆಯಲಿಚ್ಛಿಸುವ ಅಭ್ಯರ್ಥಿಗಳ ವಯೋಮಿತಿ 30 ವರ್ಷ ಮೀರಿರಬಾರದು.

6) ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರೋಸಿಕ್ಯೂಟರ್, ಸರ್ಕಾರಿ ವಕೀಲರು ಇತರೇ ಯಾವುದೇ 20 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ವಕೀಲರ ಹತ್ತಿರ ತರಬೇತಿಗೆ ನಿಯೋಜಿಸಲಾಗುವುದು.

7) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಆದಾಯ, ಜಾತಿ ಪ್ರಮಾಣ ಪತ್ರ ನೀಡಿ ಆಯ್ಕೆಯಾಗಿರುವುದು ಕಂಡುಬಂದಲ್ಲಿ ಶಿಕ್ಷೆಗೆ ಗುರಿಪಡಿಸಿ ತರಬೇತಿ ಭತ್ಯೆ ನೀಡಿರುವ ಒಟ್ಟು ಹಣದ ಜೊತೆಗೆ ಶೇಕಡಾ 10% ಬಡ್ಡಿ ಸೇರಿಸಿ ಕಂದಾಯ ಬಾಕಿ ರೂಪದಲ್ಲಿ ವಸೂಲು ಮಾಡಲಾಗುವುದು.

8) ಅಪೂರ್ಣ ಹಾಗೂ ಸಕಾಲದಲ್ಲಿ ಬಾರದ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು.

ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು
ಪಿ.ಆರ್.885 ಅಲ್ಪಸಂಖ್ಯಾತರ ಅಧಿಕಾರಿ, ಕಾರವಾರ.

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ**
**ನಂ.ಇಎಕ್ಸ್‌ಇ: ಸಿಓಎನ್: ಇತರೆ:01:08–09, ದಿನಾಂಕ:5ನೇ ಜುಲೈ, 2008**

**ವಿಷಯ:** ಅಬಕಾರಿ ಕಾಯ್ದೆ ಕಲಂಗಳ ಉಲ್ಲಂಘನೆಗಾಗಿ ಜಪ್ತಿ ಮಾಡಿರುವ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಸಮಸಂಖ್ಯೆ ಪತ್ರ ದಿನಾಂಕ:12.05.2008.
2) ತಮ್ಮ ಕಛೇರಿಯ ದೂರವಾಣಿ ಸಂದೇಶ.

ಅಬಕಾರಿ ಕಾಯ್ದೆ ಮತ್ತು ಕಲಂಗಳನ್ನು ಉಲ್ಲಂಘಿಸಿ ಅಕ್ರಮ ಅಬಕಾರಿ ವಸ್ತುಗಳ ಸಾಗಾಣಿಕೆಗೆ ಬಳಸಲಾಗಿರುವ ವಾಹನಗಳನ್ನು ಜಪ್ತಿ ಮಾಡಿ ವಿವಿಧ ಅಧಿಕಾರಿಗಳು ಗುನ್ನೆಗಳನ್ನು ದಾಖಲಿಸಿರುತ್ತಾರೆ. ಸದರಿ ಪ್ರಕರಣಗಳಲ್ಲಿ ಜಪ್ತಾಗಿರುವ ವಾಹನ ಮತ್ತು ಮುದ್ದೆ ಮಾಲನ್ನು ಈ ಪ್ರಾಧಿಕಾರದಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

| ಕ್ರಮ ಸಂಖ್ಯೆ | ಕಡತ ಸಂಖ್ಯೆ |
|---|---|
| 1. | ನಂ.ಇಎಕ್ಸ್‌ಇ: ಸಿಓಎನ್: 26: 2006–07 |
| 2. | ನಂ.ಇಎಕ್ಸ್‌ಇ: ಸಿಓಎನ್: 16: 2005–06 |
| 3. | ನಂ.ಇಎಕ್ಸ್‌ಇ: ಸಿಓಎನ್: 17: 2005–06 |
| 4. | ನಂ.ಇಎಕ್ಸ್‌ಇ: ಸಿಓಎನ್: 28: 2005–06 |
| 5. | ನಂ.ಇಎಕ್ಸ್‌ಇ: ಸಿಓಎನ್: 05: 2006–07 |
| 6. | ನಂ.ಇಎಕ್ಸ್‌ಇ: ಸಿಓಎನ್: 06: 2006–07 |
| 7. | ನಂ.ಇಎಕ್ಸ್‌ಇ: ಸಿಓಎನ್: 38: 2005–06 |
| 8. | ನಂ.ಇಎಕ್ಸ್‌ಇ: ಸಿಓಎನ್: 09: 2004–05 |
| 9. | ನಂ.ಇಎಕ್ಸ್‌ಇ: ಸಿಓಎನ್: 09: 2006–07 |
| 10. | ನಂ.ಇಎಕ್ಸ್‌ಇ: ಸಿಓಎನ್: 08: 2006–07 |
| 11. | ನಂ.ಇಎಕ್ಸ್‌ಇ: ಸಿಓಎನ್: 06: 2004–05 |
| 12. | ನಂ.ಇಎಕ್ಸ್‌ಇ: ಸಿಓಎನ್: 10: 2006–07 |
| 13. | ನಂ.ಇಎಕ್ಸ್‌ಇ: ಸಿಓಎನ್: 23: 2006–07 |
| 14. | ನಂ.ಇಎಕ್ಸ್‌ಇ: ಸಿಓಎನ್: 01: 2006–07 |
| 15. | ನಂ.ಇಎಕ್ಸ್‌ಇ: ಸಿಓಎನ್: 25: 2006–07 |
| 16. | ನಂ.ಇಎಕ್ಸ್‌ಇ: ಸಿಓಎನ್: 20: 2006–07 |

| ಕ್ರಮ ಸಂಖ್ಯೆ | ಕಡತ ಸಂಖ್ಯೆ |
|---|---|
| 17. | ನಂ.ಇಎಕ್ಸ್ಇ: ಸಿಓಎನ್: 03: 2004–05 |
| 18. | ನಂ.ಇಎಕ್ಸ್ಇ: ಸಿಓಎನ್: 26: 2007–08 |
| 19. | ನಂ.ಇಎಕ್ಸ್ಇ: ಸಿಓಎನ್: 10: 2004–05 |
| 20. | ನಂ.ಇಎಕ್ಸ್ಇ: ಸಿಓಎನ್: 08: 2004–05 |
| 21. | ನಂ.ಇಎಕ್ಸ್ಇ: ಸಿಓಎನ್: 28: 2006–07 |
| 22. | ನಂ.ಇಎಕ್ಸ್ಇ: ಸಿಓಎನ್: 03: 2007–08 |
| 23. | ನಂ.ಇಎಕ್ಸ್ಇ: ಸಿಓಎನ್: 04: 2007–08 |
| 24. | ನಂ.ಇಎಕ್ಸ್ಇ: ಸಿಓಎನ್: 09: 2007–08 |
| 25. | ನಂ.ಇಎಕ್ಸ್ಇ: ಸಿಓಎನ್: 17: 2006–07 |
| 26. | ನಂ.ಇಎಕ್ಸ್ಇ: ಸಿಓಎನ್: 13: 2007–08 |
| 27. | ನಂ.ಇಎಕ್ಸ್ಇ: ಸಿಓಎನ್: 11: 2007–08 |
| 28. | ನಂ.ಇಎಕ್ಸ್ಇ: ಸಿಓಎನ್: 10: 2007–08 |

ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಸ್,
ಧಾರವಾಡ ಜಿಲ್ಲೆ.

ಪಿ.ಆರ್.772

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–1**
**ಬೈಂದೂರ್‌ವೆಲ್, ಕಂಕನಾಡಿ, ಮಂಗಳೂರು– ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ/ ಸಿಆರ್–14/ 2008 ಎಫ್, ದಿನಾಂಕ:19ನೇ ಜುಲೈ, 2008**

**ಅರ್ಜಿದಾರರು:**

ಶ್ರೀ ವಿಶ್ವನಾಥ ಮೂಲ್ಯ
ಶ್ರೀಮತಿ ಸುಶೀಲ W/o ವಿಶ್ವನಾಥ
ಶ್ರೀ ಉದಯ S/o ವಿಶ್ವನಾಥ
ಶ್ರೀ ಯಾಧವ @ ಮಾಧವ, S/o ವಿಶ್ವನಾಥ
ಕೆಜೆ ಹೌಸ್, ಕಣಿಯೂರು ಗ್ರಾಮ, ಬೆಳ್ತಂಗಡಿ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

ಶ್ರೀ ಎಂ. ರಘುವೀರ್ ಪೈ
ಕೆನರಾ ಗೂಡ್ಸ್ ಟ್ರಾನ್ಸ್‌ಪೋರ್ಟ್, ಬೀಬಿ ಅಲಾಬಿ ರಸ್ತೆ ಬಂದರು, ಮಂಗಳೂರು.
ದಿ ನ್ಯೂ ಇಂಡಿಯಾ ಇನ್ಸುರೆನ್ಸ್ ಕಂ.ಲಿ., 2ನೇ ಮಹಡಿ, ಸೆಂಟಿನರಿ ಕಟ್ಟಡ, ಜಿ.ಎಚ್.ಎಸ್. ರಸ್ತೆ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ವಿಶ್ವನಾಥ ಮೂಲ್ಯ ಇವರು ತಮ್ಮ ಮಗನಾದ ಶ್ರೀ ವಿನಯ ಇವರು 1ನೇ ಪ್ರತಿವಾದಿಗಳಾದ ಶ್ರೀ ಎಂ. ರಘುವೀರ ಪೈ , ಕೆನರಾ ಗೂಡ್ಸ್ ಟ್ರಾನ್ಸ್‌ಪೋರ್ಟ್, ಬಿ.ಬಿ. ಅಲಾಬಿ ರೋಡ್, ಬಂದರ್, ಇವರ ಲಾರಿ ಸಂಖ್ಯೆ: ಕೆಎ–19/5732 ರಲ್ಲಿ ಕ್ಲೀನರ್ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ,ದಿನಾಂಕ:18.04.2008ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ ಉಪವಿಭಾಗ–1,
ಮಂಗಳೂರು.

ಪಿ.ಆರ್.886